# ಮುನ್ನುಡಿ

**ಸ**ನ್ಮಾರ್ಗ ಪ್ರವರ್ತಕರೂ, ಸಂಪಾದಕರೂ ಆದ ಇಬ್ರಾಹೀಮ್ ಸಈದ್‌ರ ಪರಿಚಯ ನನಗಾದದ್ದು ಇತ್ತೀಚೆಗೆ. ಸನ್ಮಾರ್ಗ ವಾರಪತ್ರಿಕೆ ಹಲವು ದೃಷ್ಟಿಗಳಿಂದ ವಿಶಿಷ್ಟವಾಗಿದೆ. ಅದೇ ಸರಣಿಯ ಬೇರೆ ಪತ್ರಿಕೆಗಳಲ್ಲಿ ಸಿಗದ ಹಲವು ಸಂಗತಿಗಳು ಇದರಲ್ಲಿ ದೊರೆಯುತ್ತವೆ. ಅವರ ಸಂಪಾದನಾ ಸಾಮರ್ಥ್ಯಕ್ಕೆ ಇದೊಂದು ಉತ್ತಮ ನಿದರ್ಶನವಾಗಿದೆ. 'ತಪ್ಪುಕಲ್ಪನೆಗಳು' ಎಂಬ ಅವರ ಗ್ರಂಥವನ್ನೋದಿದಾಗ ಇಸ್ಲಾಮ್ ಧರ್ಮದ ಬಗ್ಗೆ ನನ್ನ ಕಣ್ಣು ತೆರೆಯಿಸಿತು. ಅಲ್ಲಿ ವಿವರಣೆಗೊಂಡಿರುವ ಹಲವು ಧಾರ್ಮಿಕಾಚರಣೆಗಳು ತಿರಸ್ಕರಣೀಯವಲ್ಲವೆಂದೇ ತೋರುತ್ತದೆ. ನಿಜಕ್ಕೂ ಇದು ಎಲ್ಲ ಭಾರತೀಯರು ಓದಬೇಕಾದ ಗ್ರಂಥ.

ಸಾಹಿತಿಯಾಗಿ, ಸಂಪಾದಕರಾಗಿ, ಪತ್ರಕರ್ತರಾಗಿ, ವಾಗ್ಮಿಯಾಗಿ, ಅಲ್ಲಾಹನ ಭಕ್ತರಾಗಿ ಪ್ರವಾದಿಗಳ ಪವಿತ್ರ ಜೀವನ ಚರಿತ್ರೆಯನ್ನು ರಚಿಸಿರುವ ನನ್ನ ಪ್ರೀತಿಪಾತ್ರರಾದ ಸನ್ಮಾರ್ಗ ಸಂಪಾದಕ ಇಬ್ರಾಹೀಮ್ ಸಈದ್ ಅವರು ಆ ಗ್ರಂಥದ ಮುನ್ನುಡಿ ಬರೆಯುವ ಗೌರವವನ್ನು ನನಗೆ ತೋರಿಸಿರುವಾಗ ಆಗದೆಂದು ಹೇಳುವ ದಾರ್ಷ್ಟ್ಯ ನನಗಿಲ್ಲ. ಮುಹಮ್ಮದ್(ಸ) ಅವರಿಗೆ ಸವಿನಯ ನಮನಗಳನ್ನು ಸಲ್ಲಿಸುವ ಸುವರ್ಣಾವಕಾಶದಿಂದ ಯಾರಾದರೂ ವಂಚಿತರಾಗುವುದುಂಟೆ? ಜೀವನ ಚರಿತ್ರೆ ನನ್ನ ಮೊದಲ ಒಲವಾದ್ದರಿಂದ, ಇಬ್ರಾಹೀಮ್ ಸಈದ್‌ರಂತಹ ಸಜ್ಜನರ ಸುಸ್ನಿಗ್ಧ ಸ್ನೇಹದಿಂದ ಈ ಮುನ್ನುಡಿ ಬರೆಯುವ ವ್ಯಾಮೋಹಕ್ಕೆ ಒಳಗಾಗಿದ್ದೇನೆ. ಮುನ್ನುಡಿಯ ನಿಮಿತ್ತದಿಂದಾಗಿ ಪ್ರವಾದಿಗಳ ಜೀವನ ಚರಿತ್ರೆಯನ್ನು ಆಳವಾಗಿ ಅಭ್ಯಾಸ ಮಾಡುವ ಅವಕಾಶ ದೊರೆತದ್ದು ನನ್ನ ಪುಣ್ಯವೆಂದೇ ಬಗೆದಿದ್ದೇನೆ.

ಮುಹಮ್ಮದ್‌ರಂತಹ(ಸ) ಮಹಾ ಪ್ರವಾದಿಗಳ ಜೀವನ ಯಾತ್ರೆಯ ಪಥ ಸಸಿನವೂ ಅಲ್ಲ, ಸರಾಗವೂ ಅಲ್ಲ, ನಿಷ್ಕಂಟಕವೂ ಅಲ್ಲ ಎಂಬುದು ಲೋಕವೇದ್ಯ. ಅವರು ಮುಳ್ಳಿನ ಕಿರೀಟ ಧರಿಸಿ, ಮುಳ್ಳಿನ ಹಾವುಗೆಯ ಮೇಲೆ, ಅಗ್ನಿಜ್ವಾಲೆಯ ನಡುವೆ, ಕೆಂಡದ ಕೊಂಡದಲ್ಲಿ ನಡೆಯಬೇಕಾಗುತ್ತದೆ. ಅಲ್ಲಾಹನ ಪ್ರೀತಿ ಅವರಿಗೆ ಬಲು ಸುಲಭದಲ್ಲಿ ದೊರೆಯಲಿಲ್ಲ. ಅವರನುಭವಿಸಿದ ಕಷ್ಟ-ಸಂಕಷ್ಟಗಳಿಗೆ, ಬೇನೆ-ಬವಣೆಗಳಿಗೆ ಲೆಕ್ಕವಿಲ್ಲ. ದಿನ ಬೆಳಗಾದರೆ ಅವರು ಅಪಾಯದ ಅಂಚಿನಲ್ಲಿರುತ್ತಿದ್ದರು. ಭಾವುಕರಿಗೆ ಅದೊಂದು ಕಣ್ಣೀರಿನ ಕತೆ. ವಿರೋಧಿಗಳು ಅವರ ಕಣ್ಣಿಗೆ ಮರಳು ಧೂಳುಗಳನ್ನು ತೂರಿದಾಗ, ಕಲ್ಲೆಸೆದು ಅವರ ಮೈಯಿಂದ ರಕ್ತ ಹರಿಯುತ್ತಿದ್ದಾಗ, ಅವರನ್ನು ಬಾಣಗಳಿಂದಿರಿದಾಗ, ತಮ್ಮಲ್ಲಿದ್ದುದನ್ನು ಪರರಿಗಿತ್ತು ತಾವು ಹಸಿದಾಗ, ತಮ್ಮ ಮಡದಿಯರನ್ನೂ, ಅಳಿಯಂದಿರನ್ನೂ ಅವರ ಮೇಲೆತ್ತಿ ಕಟ್ಟಿದಾಗ ಯಾವ



ಓದುಗನಾದರೂ ಕಣ್ಣೀರಿನಲ್ಲಿ ಮಿಂಯದಿರುತ್ತಾನೆಯೇ? ನಾನಂತೂ ಅತ್ತಿದ್ದೇನೆ. ಅವರು ನನ್ನೆದುರಿಗೇ ಅಷ್ಟೆಲ್ಲ ಯಾತನೆಯನ್ನನುಭವಿಸುತ್ತಿರುವಂತೆ ನನಗೆ ವೇದನೆಯಾಗುತ್ತದೆ.

ವಿದ್ಯಾರ್ಥಿದೆಸೆಯಲ್ಲಿ 'ಪೈಗಂಬರ್ ಮುಹಮ್ಮದ್' ಎಂಬೊಂದು ಕಿರು ಹೊತ್ತಗೆಯನ್ನು ಓದಿದ ನೆನಪುಂಟು. ಆದರೆ ಪೂರ್ಣ ಪ್ರಮಾಣದ ಸಮಗ್ರ ಸ್ವರೂಪದ ಪ್ರವಾದಿಗಳ ಜೀವನ ಚರಿತ್ರೆ ಈ ತನಕ ಕನ್ನಡದಲ್ಲಿ ರಚನೆಗೊಂಡಂತೆ ತೋರದು. ಅಂತಹ ಜೀವನ ಚರಿತ್ರೆಯ ರಚನೆ ಕೇವಲ ವಿದ್ವತ್ತಿಗೆ ಸಾಧ್ಯವೆಂದು ಹೇಳಲಾರೆ. ಆಳವಾದ ಅಭ್ಯಾಸದ ಜತೆಗೆ, ಶ್ರದ್ಧೆ, ನಿಷ್ಠೆ, ಸಾಧನೆ, ಭಾವುಕತೆ ಮತ್ತು ಆರಾಧನೆಗಳ ಮೂಲಕ ಮುಹಮ್ಮದ್‌ರ(ಸ) ಬದುಕನ್ನು ಅರ್ಥೈಸಿಕೊಳ್ಳುವಂಥ ಅನುಭೂತಿ ಇದ್ದರೆ ಮಾತ್ರ ಇಂತಹ ಜೀವನ ಚರಿತ್ರೆಯ ಸೃಷ್ಟಿ ಸಾಧ್ಯ. ಇಬ್ರಾಹೀಮ್ ಸಈದ್‌ರಿಗೆ ಈ ಎಲ್ಲ ಗುಣಗಳು ಪೂರ್ಣಪ್ರಮಾಣದಲ್ಲಿವೆಯೆಂದು ನಾನು ಮನಗಂಡಿದ್ದೇನೆ. ಅವರು ಇಸ್ಲಾಮೀ ಸಾಹಿತ್ಯವನ್ನು ಕರತಲಾಮಲಕ ಮಾಡಿಕೊಂಡಿದ್ದಾರೆ. ಕುರ್‌ಆನನ್ನು ಅತೀವ ಶ್ರದ್ಧೆಯಿಂದ ಅಭ್ಯಾಸ ಮಾಡಿದ್ದಾರೆ. ಈ ಕೃತಿಯ ರಚನೆಗೆ ಕುರ್‌ಆನೇ ಆಧಾರ. ಕುರ್‌ಆನಿನ ಗರ್ಭದಿಂದಲೇ 'ಪ್ರವಾದಿ ಮುಹಮ್ಮದ್(ಸ) ಜೀವನ ಮತ್ತು ಸಂದೇಶ' ಮೂಡಿದಂತಿದೆ. ಮಕ್ಕಾದಿಂದ ಮೂರು ಮೈಲಿ ದೂರದ ನೂರ್ ಪರ್ವತ ಶಿಖರದಲ್ಲಿದ್ದ ಹಿರಾ ಗುಹೆಯಲ್ಲಿ ಮಾಡಿದ ಸುದೀರ್ಘ ಧ್ಯಾನದ ಪರಿಣಾಮವಾಗಿ, ಮುಹಮ್ಮದ್‌ರಿಗೆ(ಸ) ಪ್ರವಾದಿತ್ವ ಪದವಿ ದೊರೆಯುತ್ತದೆ. ದೇವದೂತ ಜಿಬ್ರೀಲ್ ಅವರಿಗೆ ಅಲ್ಲಾಹನ ಸಂದೇಶವನ್ನು ನೀಡುತ್ತಾರೆ. "ಓದಿರಿ, ನಿಮ್ಮನ್ನು ಸೃಷ್ಟಿಸಿದ ನಿಮ್ಮ ಪ್ರಭುವಿನ ನಾಮದಿಂದ. ಹೆಪ್ಪುಗಟ್ಟಿದ ರಕ್ತದಿಂದ ಮನುಷ್ಯನನ್ನವನು ಸೃಷ್ಟಿಸಿದನು. ಓದಿರಿ, ನಿಮ್ಮ ಪ್ರಭು ಮಹಾ ಉದಾರಿಯಾಗಿರುವನು. ಅವನು ಲೇಖನಿಯ ಮೂಲಕ ಜ್ಞಾನ ದಯಪಾಲಿಸಿದನು. ಮನುಷ್ಯನಿಗೆ ಅವನು ತಿಳಿದಿರದ ವಿಷಯದ ಜ್ಞಾನವನ್ನು ನೀಡಿದನು." ಪ್ರಪ್ರಥಮವಾಗಿ ಅವತೀರ್ಣಗೊಂಡ ಪವಿತ್ರ ಕುರ್‌ಆನಿನ ಮೊದಲ ಸೂಕ್ತಗಳಲ್ಲಿ ಕೆಲವಿವು. ಜಿಬ್ರೀಲ್‌ರ ರೆಕ್ಕೆ ಬಡಿತದಿಂದ ಉತ್ಪತ್ತಿಯಾದ ನೀರಿನಲ್ಲಿ ಇಬ್ಬರೂ ಸ್ನಾನ ಮಾಡುತ್ತಾರೆ. ಇಬ್ಬರೂ ನಮಾಝ್ ಮಾಡುತ್ತಾರೆ. ಅಲ್ಲಾಹ್ ಸರ್ವಶ್ರೇಷ್ಠ ಸೃಷ್ಟಿಕರ್ತನೆಂದೂ ಅದ್ವಿತೀಯ ಆರಾಧ್ಯನೆಂದೂ, ತಾನವನ ದಾಸನೆಂದೂ ಸಂದೇಶವಾಹಕನೆಂದೂ ಪ್ರವಾದಿಯೆಂದೂ ಜಿಬ್ರೀಲ್‌ರ ದೌತ್ಯದಿಂದ ಮುಹಮ್ಮದ್‌ರಿಗೆ(ಸ) ಸ್ಪಷ್ಟವಾಗುತ್ತದೆ.

ದ್ವೈತ ಮಾರ್ಗದ ದಾಸ್ಯಭಾವದ ಮೂಲಕ ಮುಹಮ್ಮದ್‌ರು(ಸ) ದೇವನನ್ನು ಒಲಿಸಿಕೊಳ್ಳುತ್ತಾರೆ. ಅವನ ಕೃಪೆಗೆ ಪಾತ್ರರಾಗುತ್ತಾರೆ. ಮಹಾಕವಿ ಕುವೆಂಪು ಅವರ ಅನೇಕ ಸೂಕ್ತಿಗಳು 'ಆವುದಾಗಲಿ ನೆಪಂ, ಫಲದಾಯಕಂ ತಪಂ', 'ಈಶ್ವರನ ದಯೆಯಿರಲು ಎಲ್ಲ ಮಂಗಳವಹುದು', 'ಪ್ರಾರ್ಥನೆಯು ಸಾಧಿಸದ ಕಾರ್ಯವೊಂದಿಲ್ಲ', ಸತ್ಯ ಯುಕ್ತವಾಗಿವೆ ಎಂಬುದಕ್ಕೆ ಪ್ರವಾದಿಗಳ ಜೀವನವೇ ಸಾಕ್ಷಿಯಾಗಿದೆ. ಅವರ

ಜೀವನ ನಿಷ್ಕಂಟಕವಾದುದಲ್ಲ - ನಿರ್ವಿಘ್ನವಾದುದಲ್ಲ ನಿಜ; ಅದೊಂದು ಯಾತನಾಮಯ ದಿವ್ಯ ಯಾತ್ರೆ. ಆ ವಿಘ್ನ ಕಂಟಕಗಳೇ ದೇವೇಚ್ಛೆಯ ಪಾಕಕಾರ್ಯಕ್ಕೆ ಇಂಧನಗಳಾಗುತ್ತವೆ. ಅವರಲ್ಲಿ ಪ್ರವಾದಿ ಪ್ರಜ್ಞೆ ಮೂಡಿದ ನಂತರ ಜೀವನಾಂತ್ಯದ ತನಕ ಅವರು ಹೆಜ್ಜೆಹೆಜ್ಜೆಗೂ ಅಪಾಯ ಪರಂಪರೆಯನ್ನೆದುರಿಸಬೇಕಾಗುತ್ತದೆ. ಅಲ್ಲಾಹನ ಮೇಲಣ ಅನನ್ಯ ಭಕ್ತಿಯಿಂದಾಗಿ, ಶರಣಾಗತಿಯಿಂದಾಗಿ, ಪ್ರಾರ್ಥನೆ-ಧ್ಯಾನ-ತಪಸ್ಸುಗಳಿಂದಾಗಿ ವಿರೋಧಿ ಬಣಗಳೆಲ್ಲ ಹುಲ್ಲುಕಡ್ಡಿಗಳಾಗುತ್ತವೆ. ಹಿಜಿರಾ ಆಗಲಿ, ಯುದ್ಧವಾಗಲಿ, ಸಂಧಾನವಾಗಲಿ, ರಾಜ್ಯ ಸ್ಥಾಪನೆಯಾಗಲಿ, ಸೈನ್ಯ ಜಮಾವಣೆಯಾಗಲಿ, ಪ್ರತಿಯೊಂದು ಸಂಗತಿಯೂ ಕುರ್ಆನಿನಲ್ಲಿ ಉಕ್ತಗೊಂಡಿರುವ ಅಲ್ಲಾಹನ ಸಂದೇಶದಂತೆ ನಡೆಯುತ್ತವೆ. 'ತೇನ ವಿನಾ ತೃಣಮಪಿನ ಚಲತಿ' ಎಂಬುದು ಅವರ ಆತ್ಮವಿಶ್ವಾಸ. ಯುದ್ಧದ ಮಧ್ಯದಲ್ಲಿಯೂ ಅವರು 'ಓ ಅಲ್ಲಾಹ್! ನೀನು ನನ್ನಲ್ಲಿ ಮಾಡಿರುವಂತಹ ವಾಗ್ದಾನವನ್ನು ಪೂರ್ಣಗೊಳಿಸು' ಎಂದು ಪ್ರಾರ್ಥಿಸುತ್ತಿದ್ದರು. ಬದ್ರ್ ರಣಾಂಗಣದ ಸನ್ನಿವೇಶವೊಂದನ್ನು ಜೀವನ ಚರಿತ್ರಕಾರರು ಕುರ್ಆನಿನ ಸೂಕ್ತಗಳಿಂದಲೇ ವಿವರಿಸುತ್ತಾರೆ. ಅವೆಲ್ಲವೂ ಅಲ್ಲಾಹ್‌ನಿಂದಲೇ ಅವತೀರ್ಣಗೊಂಡಂಥವು.

"ನೀವು ಅವರನ್ನು ವಧಿಸಲಿಲ್ಲ.
ನಿಜವಾಗಿ ಅಲ್ಲಾಹನು ಅವರನ್ನು ವಧಿಸಿದನು.
ಪ್ರವಾದಿವರ್ಯರೇ! ನೀವು ಎಸೆಯಲಿಲ್ಲ,
ನಿಜವಾಗಿ ಅಲ್ಲಾಹನು ಎಸೆದನು.
ಇದು ಅಲ್ಲಾಹನು ಸತ್ಯವಿಶ್ವಾಸಿಗಳನ್ನು ಒಂದು ಅತ್ಯುತ್ತಮ ಪರೀಕ್ಷೆಯಿಂದ
ಜಯಪ್ರದವಾಗಿ ಪಾರುಗಾಣಿಸಲಿಕ್ಕಾಗಿತ್ತು.
ಖಂಡಿತವಾಗಿಯೂ ಅಲ್ಲಾಹನು ಸರ್ವಶ್ರುತನೂ ಸರ್ವಜ್ಞನೂ ಆಗಿರುತ್ತಾನೆ."

ಯುದ್ಧದಲ್ಲಿ ಜಯ ದೊರೆತಾಗ ತಾವು ಗೆದ್ದುದಾಗಿ ಮುಹಮ್ಮದ್‌ರು(ಸ) ಹೇಳಿಕೊಳ್ಳುವುದಿಲ್ಲ. "ಅವನು ತನ್ನ ವಾಗ್ದಾನವನ್ನು ಪೂರ್ಣಗೊಳಿಸಿದನು. ತನ್ನ ದಾಸನಿಗೆ ನೆರವಾದನು. ಎಲ್ಲ ತಂಡಗಳನ್ನೂ ಆ ಏಕೇಶನು ಸೋಲಿಸಿಬಿಟ್ಟನು" ಎಂದೇ ಅವರು ಹೇಳುತ್ತಾರೆ.

ಜಗತ್ತಿನ ಮಹಾಪುರುಷರ ಬಾಲ್ಯ ಜೀವನವೇ ಅತ್ಯಂತ ವಿಶಿಷ್ಟ ರೀತಿಯಲ್ಲಿ ವಿಕಾಸಗೊಳ್ಳುತ್ತದೆ. ಸರ್ವಾಂತರ್ಯಾಮಿಯಾಗಿರುವ ಅಲ್ಲಾಹನೇ ತನ್ನ ಆಯ್ಕೆಯ ವ್ಯಕ್ತಿಯನ್ನು ತುಂಬ ಜೋಪಾನವಾಗಿ ಕೈ ಹಿಡಿದು ನಡೆಸುವಂತೆ, ಸದಾ ಅವನಿಗೆ ಮೈಗಾವಲಾಗಿರುವಂತೆ ತೋರುತ್ತದೆ. ಆಡು ಮೇಯಿಸುತ್ತಿದ್ದ ಬಾಲಕ ಮುಹಮ್ಮದ್(ಸ) ಪ್ರಕೃತಿಯ ಮೂಲಕ ಅಲ್ಲಾಹನೊಡನೆ ಮಾತಾಡುತ್ತಾರೆ. ಎಲ್ಲೆಲ್ಲೂ ಅಲ್ಲಾಹನನ್ನೇ



ಕಾಣುತ್ತಾರೆ. ಅವರ ದೈವೋನ್ಮಾದ ಅದ್ವಿತೀಯವಾದದ್ದು; ಅದೇ ಅವರ ಬದುಕಿನ ನೆಲೆ-ಬೆಲೆ-ಸೆಲೆಯಾಗುತ್ತದೆ. ಅವರ ಬದುಕನ್ನೆಲ್ಲ ಆವರಿಸಿಕೊಳ್ಳುತ್ತದೆ. ಅಲ್ಲಾಹನ ಇಚ್ಛೆಯ ಅಭಿವ್ಯಕ್ತಿಗೆ ಅವರ ಬದುಕೊಂದು ಮಾಧ್ಯಮವಾಗುತ್ತದೆ. ಆದ್ದರಿಂದಲೇ ಅವರ ನಿತ್ಯ ಜೀವನದಲ್ಲಿ ಸತ್ಯನಿಷ್ಠೆ, ಪರಾನುಕಂಪ, ಸ್ಥಿತಪ್ರಜ್ಞೆ, ಪ್ರಾಮಾಣಿಕತೆ, ಸರ್ವಾನುಭವ ಮೊದಲಾದ ದಿವ್ಯಗುಣಗಳು ರಾರಾಜಿಸುತ್ತವೆ. ಅಲ್ಲಾಹನ ಸಂದೇಶವೇ ಅವರ ಅಂತರ್ವಾಣಿಯಾಗಿದೆ ಎಂದರೂ ಸಲ್ಲುತ್ತದೆ. ಸಂಕಟವೋ ಸಮಸ್ಯೆಯೋ ಸಂಪ್ರಾಪ್ತವಾದಾಗ ಅವರು ಧ್ಯಾನಮಗ್ನರಾಗುತ್ತಾರೆ. ಆ ಸಮಯದಲ್ಲವರಿಗೆ ಅಲ್ಲಾಹನ ವಾಣಿ ಕೇಳಿಸುತ್ತದೆ. ತಮ್ಮ ಪ್ರತಿಯೊಂದು ಕ್ರಿಯೆಯೂ ಅಲ್ಲಾಹನ ಪ್ರೇರಣೆಯಿಂದಲೇ ನಡೆಯುತ್ತದೆಂದು ಅವರೇ ಸ್ಪಷ್ಟಪಡಿಸಿದ್ದಾರೆ. ಸೃಷ್ಟಿಕರ್ತನೂ ಸರ್ವವ್ಯಾಪಿಯೂ ನಿರಾಕಾರನೂ ಆದ ಅಲ್ಲಾಹನನ್ನು ಕಲ್ಲುಮಣ್ಣುಗಳ ವಿಗ್ರಹಗಳಲ್ಲಿ ಹಿಡಿದಿಡುವುದು ಸಾಧ್ಯವೇ? ಅದು ವಿವೇಕ ಸಮ್ಮತವೇ ಎಂದು ಆಗಿನ ಕಾಲಕ್ಕೆ ಪ್ರಶ್ನಿಸಿದ್ದು ಧಾರ್ಮಿಕ ಇತಿಹಾಸದ ಮಹಾದ್ಭುತವೆಂದೇ ಹೇಳಬಹುದು. ಆ ಕಾಲದ ಕಅಬಾ ಮಂದಿರದಲ್ಲಿಯೇ ಮುನ್ನೂರರವತ್ತು ವಿಗ್ರಹಗಳಿದ್ದುವಂತೆ. ಪ್ರವಾದಿಗಳೇರಿದ ಆಧ್ಯಾತ್ಮ ಶಿಖರವಾಗಲಿ ನಿರಾಕಾರ ತತ್ವದ ಸೂಕ್ಷ್ಮಾತಿಸೂಕ್ಷ್ಮ ವಿಚಾರವಾಗಲಿ ಜಡ ಸಂಪ್ರದಾಯದ ಬುದ್ಧಿ ಮಾಂದ್ಯರಿಗೆ ಎಟಕುತ್ತದೆಯೇ? ಆದ್ದರಿಂದ ಅವರು ಜೀವನದುದ್ದಕ್ಕೂ ಮಾನವನ ಐಕ್ಯಕ್ಕಾಗಿ ಜಗತ್ತಿನ ಲೇಸಿಗಾಗಿ ಸಕಲ ನಿಂದಾಪಮಾನಗಳನ್ನು ಸಹಿಸಬೇಕಾಗುತ್ತದೆ. ಸರ್ವ ಸುಖ-ಭೋಗ ವ್ಯಾಮೋಹಗಳನ್ನೂ ತ್ಯಜಿಸಬೇಕಾಗುತ್ತದೆ; ಆತ್ಮ ಸುಖಕ್ಕಾಗಿ ಮಾತ್ರವಲ್ಲ ಪರರ ಹಿತಕ್ಕಾಗಿ ಉಪವಾಸ ಮಾಡಬೇಕಾಗುತ್ತದೆ; ಯುದ್ಧದ ಬೇನೆಯನ್ನನುಭವಿಸ ಬೇಕಾಗುತ್ತದೆ. ಕೊನೆಗೆ ತಾವು ಜನಿಸಿದ ಮಕ್ಕಾ ನಗರವೇ ಹಗೆಯಾಗಲಾಗಿ ಮುಹಮ್ಮದ್‌ರವರು(ಸ) ಮದೀನಾವನ್ನು ಲೌಕಿಕ ಹಾಗೂ ಧಾರ್ಮಿಕ ಕೇಂದ್ರವನ್ನಾಗಿ ರೂಪಿಸಿಕೊಳ್ಳುತ್ತಾರೆ. ಅದು ಮಕ್ಕಾವನ್ನು ತನ್ನ ತೆಕ್ಕೆಯಲ್ಲಿ ಸೇರಿಸಿಕೊಳ್ಳುತ್ತದಲ್ಲದೆ ಜಗತ್ತಿನ ಕಣ್ಬೊಲವಾಗುತ್ತದೆ.

ಅರೇಬಿಯಾದಲ್ಲಿದ್ದ ಮುಹಮ್ಮದ್‌ರ(ಸ) ಜನನ ಪೂರ್ವ ಪರಿಸ್ಥಿತಿಯನ್ನು ಲಕ್ಷಿಸಿದಾಗ ಅವರ ಜನನ ದೈವೀ ಘಟನೆ ಮಾತ್ರವಲ್ಲ ಚಾರಿತ್ರಿಕಾವಶ್ಯಕತೆಯ ಅದ್ಭುತ ಘಟನೆಯೂ ಹೌದೆಂಬುದು ಸ್ಪಷ್ಟವಾಗುತ್ತದೆ. ಜೀವನ ಚರಿತ್ರೆಕಾರರೇ ಆ ಪರಿಸ್ಥಿತಿಯ ಚಿತ್ರವನ್ನು ಕಣ್ಣಿಗೆ ಕಟ್ಟುವಂತೆ ಕುಂಚಿಸಿದ್ದಾರೆ: "ಅಲ್ಲಿ ನಾಗರಿಕತೆಯ ಬೆಳಕು ಹರಿದೇ ಇರಲಿಲ್ಲ. ಮಾನವೀಯತೆಯು ನಿದ್ದೆಯಿಂದ ಎಚ್ಚರಗೊಂಡೇ ಇರಲಿಲ್ಲ. ಎಲ್ಲ ಕಡೆಯೂ ಅರಾಜಕತೆ ವ್ಯಾಪಿಸಿತ್ತು. ಮನುಷ್ಯ ಮನುಷ್ಯರ ನಡುವೆ ಒಡಕು ಉಂಟಾಗಿತ್ತು. ಜಗಳ, ಯುದ್ಧ, ಕೊಳ್ಳೆ, ದರೋಡೆಗಳು ವ್ಯಾಪಕವಾಗಿದ್ದುವು. ವ್ಯಭಿಚಾರ, ಶರಾಬು ಮತ್ತು ಜೂಜಿನಿಂದ ಮೈವೆತ್ತ ಅಜ್ಞಾನ ಕಾಲದ ಸಂಸ್ಕೃತಿ ಉತ್ತುಂಗತೆಯಲ್ಲಿತ್ತು. ಕುರೈಶರು

ಕೂಡಾ ಬಹುದೇವ ವಿಶ್ವಾಸ ಮತ್ತು ಮೂರ್ತಿಪೂಜೆಯನ್ನು ಧರ್ಮವಾಗಿಸಿಕೊಂಡಿದ್ದರು. ಯಹೂದಿಗಳು ವೇದಾಂತ ಮತ್ತು ಕರ್ಮಶಾಸ್ತ್ರದ ಕೂದಲು ಸೀಳುವಿಕೆಯನ್ನು ತಮ್ಮ ವ್ಯಾಪಾರವಾಗಿ ಮಾಡಿಕೊಂಡಿದ್ದರು. ಮಕ್ಕಾ ಮತ್ತು ತಾಯಿಫ್‌ನ ಸಾಹುಕಾರರು ಬಡ್ಡಿ ವ್ಯವಹಾರದ ಒಂದು ವ್ಯವಸ್ಥಿತ ಜಾಲವನ್ನೇ ಹರಡಿದ್ದರು." ಸಮತೋಲನ ನಿಸರ್ಗದ ಮೂಲಭೂತ ಲಕ್ಷಣ. ಅದು ಸುರಕ್ಷಿತವಾಗಿದ್ದರೇನೇ ಜಗತ್ತಿನಲ್ಲಿ ಶಾಂತಿ, ಮಾನವಕುಲದಲ್ಲಿ ಸಾಮರಸ್ಯ ಸಾಧ್ಯ. ಅದಕ್ಕೆ ಧಕ್ಕೆಯೊದಗಿದಾಗ ಸರ್ವನಾಶ ಅನಿವಾರ್ಯ. ಪ್ರಳಯದ ಸಮಾಧಿಯ ಮೇಲೆ ನವ ಸೃಷ್ಟಿ ಉದಯಿಸುತ್ತದೆ. ಹೊಸ ಸಂಸ್ಕೃತಿ ಅರಳುತ್ತದೆ. ಇಂತಹ ಉದಯದ ಮತ್ತು ಅರಳಿಕೆಯ ಹರಿಕಾರರಾಗಿ ಬುದ್ಧ, ಯೇಸುಕ್ರಿಸ್ತ, ಮುಹಮ್ಮದ್(ಸ), ಬಸವೇಶ್ವರರಂಥವರು ಜನ್ಮಧಾರಣೆ ಮಾಡುತ್ತಾರೆ. ಅವರ ಮತ್ತು ಅವರ ಸಮಕಾಲೀನ ಸಹಚರರ ಅಂದಿನ ಬಲಿದಾನದ ಪ್ರಭಾವಳಿ ಇಂದಿಗೂ ಜಗತ್ತಿನ ಮೇಲೆ ಅಚ್ಚಳಿಯದಿದೆ. ಮಾನವಕುಲ ಅದರ ಫಲವನ್ನನುಭವಿಸುತ್ತಿದೆ.

ಈ ಮಹಾಪುರುಷರು ಸ್ಥಾಪಿಸಿದ ಮತಗಳ ಬಾಹ್ಯಾಚರಣೆಗಳಲ್ಲಿ ವ್ಯತ್ಯಾಸಗಳಿರಬಹುದೇ ಹೊರತು, ಅವರ ಸಾಧನಾ ವಿಧಾನದಲ್ಲಿ, ಬೋಧಿಸಿದ ತತ್ವಗಳಲ್ಲಿ, ಆಧ್ಯಾತ್ಮ ಸಿದ್ಧಿಯಲ್ಲಿ ವೈಷಮ್ಯಗಳಿಗಿಂತ ಸಾಮ್ಯವೇ ಹೆಚ್ಚು. ಮುಹಮ್ಮದ್‌ರವರು(ಸ) ನೀಡಿದ ಪ್ರಥಮ ಜುಮಾ ಪ್ರವಚನದ ಕಡೆಗೆ ಗಮನ ಹರಿಸಿದರೆ ಈ ಮಾತಿನ ಸತ್ಯ ವೇದ್ಯವಾಗುತ್ತದೆ:

"ಸರ್ವ ಸ್ತುತಿ-ಸ್ತೋತ್ರಗಳು ಅಲ್ಲಾಹನಿಗೆ.....
ನಾನು ಅವನನ್ನು ನಿರಾಕರಿಸುವುದಿಲ್ಲ.
ಅವನನ್ನು ಯಾರು ನಿರಾಕರಿಸುತ್ತಾರೋ ಅವನನ್ನು ನನ್ನ ಶತ್ರುವೆಂದು ಪರಿಗಣಿಸುತ್ತೇನೆ.
ಅಲ್ಲಾಹನಲ್ಲದೆ ಅನ್ಯ ಆರಾಧ್ಯರಿಲ್ಲವೆಂದು ನಾನು ಸಾಕ್ಷ್ಯವಹಿಸುತ್ತೇನೆ."

ಈ ಘೋಷಣೆಯನ್ನು ಎಚ್ಚರಿಕೆಯಿಂದ ವಿಶ್ಲೇಷಿಸಬೇಕಾಗಿದೆ. ಮೂರ್ತಿಪೂಜೆ ಮತ್ತು ಬಹುದೇವಾರಾಧನೆಗಳ ಹಿನ್ನೆಲೆಯಲ್ಲಿ ಅಲ್ಲಾಹನ ಏಕೈಕತ್ವವನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಸತ್ಯಾಂಶಗಳನ್ನು ಸ್ವೀಕರಿಸಿ, ಮಾನವರೆಲ್ಲರೂ ಅನುಷ್ಠಾನಿಸಿದಾಗ ಜಗತ್ತಿನಲ್ಲಿ ಶಾಂತಿ ನೆಲಸುವಂತಾಗುತ್ತದೆ. ಮೇಲಿನ ಘೋಷಣೆಯಲ್ಲಿ ಬರುವ 'ಅನ್ಯ ಆರಾಧ್ಯರಿಲ್ಲ'ವೆಂಬ ಮಾತು ಪ್ರತಿಯೊಂದು ಮತದ ಕ್ಷುದ್ರ ದೇವತೆಗಳಿಗನ್ವಯಿಸುತ್ತದೆಂದು ಅರ್ಥ ಮಾಡಿಕೊಳ್ಳಬೇಕಾಗುತ್ತದೆ.

ಮಾನವಕುಲದ ಮೇಲೆ ಅದ್ಭುತ, ಅದಮ್ಯ, ವ್ಯಾಪಕ ಪ್ರಭಾವವನ್ನು ಬೀರಿದ, ವಿನೂತನ, ವಿನಶ್ವರ ಸಾಂಸ್ಕೃತಿಕ ಪರಂಪರೆಯನ್ನು ನಿರ್ಮಿಸಿದ ಧಾರ್ಮಿಕ ನಾಯಕರು



ಮೂವರು: ಬುದ್ಧ, ಏಸು, ಮುಹಮ್ಮದ್(ಸ). ಜಾಗತಿಕ ಇತಿಹಾಸದ ಗತಿಯನ್ನೇ ತಿದ್ದುವ, ಪ್ರೇರಿಸುವ ಮತ್ತು ತಿರುಗಿಸುವ ಜೀವಂತ ಪ್ರಜ್ವಲ ಶಕ್ತಿಗಳೆಂದರೆ ಕ್ರಿಶ್ಚಿಯಾನಿಟಿ ಮತ್ತು ಇಸ್ಲಾಮ್ ಧರ್ಮ. ಒಂದು ಸಾವಿರದ ನಾನೂರು ವರ್ಷಗಳ ನಂತರವೂ ಪ್ರವಾದಿವರ್ಯರ(ಸ) ಬೋಧನೆ ಹೊಚ್ಚ ಹೊಸದಾಗಿದೆ ಮಾತ್ರವಲ್ಲ, ಜಗತ್ತಿನ ಭವಿಷ್ಯವನ್ನು ರೂಪಿಸಬಲ್ಲ ಮೂಲಭೂತ ಜೀವದ್ರವ್ಯ, ಸಂಜೀವನ ಶಕ್ತಿ ಅದರಲ್ಲಿದೆಯೆನ್ನುವುದರಲ್ಲಿ ಸಂದೇಹವಿಲ್ಲ. ನಿಜವಾದ ಧರ್ಮ ಯಾವುದೇ ಆಗಲಿ, ಅದು ಮತ್ತೊಂದನ್ನು ವಿರೋಧಿಸಲಾರದು; ಅಲ್ಲಾಹನಲ್ಲಿ ಅಥವಾ ಪರಬ್ರಹ್ಮನಲ್ಲಿ ನಿಷ್ಠೆಯುಳ್ಳ ಭಕ್ತ ಬೇರೊಬ್ಬ ಭಕ್ತನನ್ನು ದ್ವೇಷಿಸಲಾರನು. ಜಗತ್ತಿನ ಅಗ್ರಮಾನ್ಯ ದೈವಭಕ್ತರಲ್ಲಿ ಮುಹಮ್ಮದ್‌ರು(ಸ) ಶಿಖರ ಸ್ಥಾನದಲ್ಲಿದ್ದಾರೆಂಬುದೂ ನಿಜವೇ. ಇಸ್ಲಾಮ್ ಧರ್ಮ ಆಧ್ಯಾತ್ಮ ತತ್ವದ ನಿಧಿಯಷ್ಟೇ ಅಲ್ಲ, ಜೀವನ ಮೀಮಾಂಸೆಯೂ ಹೌದು. ಇಬ್ರಾಹೀಮ್ ಸಈದರ ಈ ಗ್ರಂಥವನ್ನೋದಿದ ಬಳಿಕ ಇಸ್ಲಾಮ್ ಅನ್ನು ನಾನು ಅರ್ಥಮಾಡಿಕೊಂಡಿರುವ ಬಗೆಯಿದು. ಪೂರ್ವಗ್ರಹ ಪಕ್ಷಪಾತ ದೂರನಾದ, ಸರ್ವಭೂತ ಹಿತರತನಾದ ಯಾವ ವ್ಯಕ್ತಿಗಾದರೂ ಈ ಸಂಗತಿಗಳು ಅಪಥ್ಯವಾಗಲಾರವೆಂದೇ ನನ್ನ ನಂಬಿಕೆ.

ಅರೇಬಿಯಾ ಮರುಭೂಮಿಯಲ್ಲಿ ಆಧ್ಯಾತ್ಮಿಕ ಪ್ರವಾಹವನ್ನು ಹರಿಸಿ, ಧಾರ್ಮಿಕ ಬೀಜವನ್ನು ಬಿತ್ತಿ, ಉಚ್ಚ ಸಂಸ್ಕೃತಿಯ ಬೆಳಕನ್ನು ಪಡೆದು, ಇಡೀ ಜಗತ್ತಿಗೆ ಹಂಚಿದ ಪುಣ್ಯಜೀವಿ ಮುಹಮ್ಮದ್‌ರು(ಸ) 'ಲಾ ಇಲಾಹ ಇಲ್ಲಲ್ಲಾಹ್' ಮಂತ್ರಜ್ಯೋತಿಯಿಂದ ಇಡೀ ವಿಶ್ವವನ್ನೇ ಬೆಳಗಿದ ಮಹಾತ್ಮರವರು. ಇತಿಹಾಸವನ್ನು ನಿರ್ಮಿಸಿದ ಈ ಭವ್ಯ ಮಾನವ ಈ ನೆಲದ ಮೇಲೆ ಹರಿದಾಡದಿದ್ದರೆ ಜಗತ್ತು ಅಜ್ಞಾನಾಂಧಕಾರದಲ್ಲಿ ಮೌಢ್ಯ ಮಾಲಿನ್ಯದ ಕೆಸರುಸುಬಿನಲ್ಲಿ, ಅನಾಗರಿಕತೆಯ ಬಸಿರಲ್ಲಿ ತೊಳಲಾಡುತ್ತಿದ್ದಿರಬೇಕೆಂಬುದರಲ್ಲಿ ಅನುಮಾನವಿಲ್ಲ. ಇಂತಹ ಮಹಾನುಭಾವರ ಪುಣ್ಯಕಥೆಯನ್ನು ರಚಿಸಬಲ್ಲ ಸಾಮರ್ಥ್ಯ, ಸಾಹಸ, ಮನೋಧರ್ಮ ಮತ್ತು ಯೋಗ್ಯತೆ ಅವರ ನಿಷ್ಠಾವಂತ ಅನುಯಾಯಿಗಳಿಗೆ ಮಾತ್ರ ಮೀಸಲು. ಈ ಪವಿತ್ರ ಕಾರ್ಯ ಸಾಧನೆಗೆ ಅತ್ಯಗತ್ಯವಾದ ಸಕಲ ಗುಣಗಳು ಇಬ್ರಾಹೀಮ್ ಸಈದರಲ್ಲಿ ಸುಸಮೃದ್ಧವಾಗಿವೆ. ಅವರು ದೈವಭಕ್ತರು, ಪ್ರವಾದಿ ನಿಷ್ಠರು. ಉರ್ದು, ಅರೇಬಿಕ್ ಕನ್ನಡ ಭಾಷೆಗಳಲ್ಲಿ ಪಾರಂಗತರು; ಲೇಖನ ಕಾಯಕದಲ್ಲಿ ಸಿದ್ಧ ಹಸ್ತರು. ಕನ್ನಡದ ಮೈಯಲ್ಲಿ ಉರ್ದು, ಅರೇಬಿಕ್ ಭಾಷೆಗಳ ಸತ್ವವನ್ನು ಮೇಳೈಸಿ, ಕನ್ನಡದ ಕೆಚ್ಚನ್ನು ಹೆಚ್ಚಿಸಿರುವ ಅಭಿಮಾನಿಯವರು. ಪ್ರವಾದಿಗಳ ಪವಿತ್ರ ಜೀವನ ಸಂದೇಶವನ್ನು ಬಿತ್ತರಿಸುವ ಮೂಲಕ ಕನ್ನಡದ ಗೌರವವನ್ನು ಮುಗಿಲಿಗೇರಿಸಿದ್ದಾರೆ. ಮುಹಮ್ಮದ್‌ರ(ಸ) ಜೀವನವೆಂತು ಸರಳವೋ ಅವರು ಬಳಸುವ ಭಾಷೆಯೂ ಅಷ್ಟೇ ಸರಳ. ಮೃದು ಪದಬಂಧ, ಸಮಾಸ ರಹಿತ ನಿರಾಡಂಬರತೆ,

ದೀರ್ಘವೂ ಅಲ್ಲದ, ಹ್ರಸ್ವವೂ ಅಲ್ಲದ ಪರಿಣತ ವಾಕ್ಯಗಳು, ಪದಪದಗಳ, ವಾಕ್ಯವಾಕ್ಯಗಳ ಸಂಶಿಷ್ಟತೆ ಅವರ ಶೈಲಿಯ ಹೆಗ್ಗುಣಗಳು. ದೂರದೂರಕ್ಕೆ ಬರುವ ಅರೇಬಿಕ್ ಪದಗಳು ಕನ್ನಡದ ಶ್ರೀಮಂತಿಕೆಯನ್ನು ಪುಷ್ಟಿಗೊಳಿಸುತ್ತವೆ. ಉದಾಹರಣೆಗಾಗಿ ಪ್ರವಾದಿಗಳ ನಿವಾಸದ ವರ್ಣನೆಯನ್ನು ಗಮನಿಸಬಹುದು:

ಮಸ್ಜಿದುನ್ನಬವಿಗೆ ತಾಗಿ ಪಶ್ಚಿಮದ ಕಡೆ ಎರಡು ಕೋಣೆಗಳನ್ನು ನಿರ್ಮಿಸಲಾಗಿದೆ. ಹಸಿ ಇಟ್ಟಿಗೆ ಮತ್ತು ಗಾರೆಗಳಿಂದ ಗೋಡೆಗಳನ್ನು ನಿರ್ಮಿಸಲಾಗಿದೆ. ಗೋಡೆಯು ಆಳೆತ್ತರಕ್ಕಿಂತಲೂ ಹೆಚ್ಚಾದಾಗ ಒಬ್ಬ ವ್ಯಕ್ತಿ ನಿಂತು ಅವನ ಕೈಯನ್ನು ಮೇಲೆ ಚಾಚಿದಾಗ ಕೈಗೆಟಕುವಂತೆ ಖರ್ಜೂರದ ಪಕ್ಕಾಸುಗಳನ್ನಿಟ್ಟು ಅವುಗಳನ್ನು ಎಲೆಗಳಿಂದ ಮುಚ್ಚಲಾಗಿದೆ. ಇದುವೇ ಆ ಕೋಣೆಗಳ ಛಾವಣಿಯಾಗಿದೆ. ಅದಕ್ಕೆ ಗಾರೆಯನ್ನು ಲೇಪಿಸಿ ಸೆಖೆ ಮತ್ತು ಮಳೆಯಿಂದ ರಕ್ಷಣೆ ಹೊಂದಲು ವ್ಯವಸ್ಥೆ ಮಾಡಲಾಗಿದೆ. ಈ ಕೋಣೆಗಳ ಜೊತೆಗೆ ಅಂಗಣವಾಗಲಿ, ಪಡಸಾಲೆಯಾಗಲಿ, ಇತರ ಕೋಣೆಗಳಾಗಲಿ ಇಲ್ಲ. ಮಣ್ಣಿನ ಇಟ್ಟಿಗೆಯಿಂದ ನಿಲ್ಲಿಸಿದ ಗೋಡೆಗಳಲ್ಲಿ ಹಲವೆಡೆ ಬಿರುಕು ಇದ್ದು ಬಿಸಿಲು ಒಳಗೆ ಬರುತ್ತದೆ. ಮಣ್ಣಿನ ಗೋಡೆಗಳನ್ನು ಮಳೆಯಿಂದ ರಕ್ಷಿಸಲು ಅವುಗಳಿಗೆ ಉಣ್ಣೆಯ ಕಂಬಳಿಗಳನ್ನು ಹೊದಿಸಲಾಗಿದೆ. ಬಾಗಿಲಿಗೆ ದಾರಂದವೆಂಬುದಿಲ್ಲ. ಕೇವಲ ಗೋಡೆಯ ಮಧ್ಯೆ ಸ್ಥಳ ಬಿಡಲಾಗಿದ್ದು ಅದಕ್ಕೆ ಕಂಬಳಿಯನ್ನು ಇಳಿಬಿಟ್ಟು ಪರ್ದಾ ಮಾಡಲಾಗಿದೆ.

ಈ ವರ್ಣನೆಯಲ್ಲಿ ರಂಗಾಗಲಿ ಬಿಂಕವಾಗಲಿ ಇಲ್ಲ.

ಪ್ರವಾದಿಗಳ ಪ್ರವಚನ ಪ್ರತಿಪಾದನೆಯ ಶೈಲಿಯಂತೂ ಅರ್ಥಯುಕ್ತ, ಭಾವದೀಪ್ತ, ಸುಲಭಗ್ರಾಹ್ಯ; ಎಲ್ಲಿಯೂ ಪೆಡಸಿಲ್ಲ, ಡಬ್ಬು ಡೊಳ್ಳುಗಳಿಲ್ಲ, ಡಾಂಬಿಕತೆಯಿಲ್ಲ. ಕೆಲವನ್ನು ಮಾತ್ರ ಇಲ್ಲಿ ಉದ್ಧರಿಸಲಾಗಿದೆ.

- ಎಲ್ಲ ಮಾತುಗಳಿಗಿಂತಲೂ ಮಿಗಿಲಾದ ಮಾತು ಅಲ್ಲಾಹನ ಸ್ಮರಣೆಯಾಗಿದೆ.
- ಅತ್ಯುತ್ತಮ ಕೆಲಸವೆಂದರೆ ಸಾಹಸದ ಕೆಲಸ.
- ಮನುಷ್ಯನಿಗೆ ಧಾರ್ಮಿಕ, ನೈತಿಕ ಮತ್ತು ಆಧ್ಯಾತ್ಮಿಕ ಲಾಭ ಸಿಗುವ ಕಾರ್ಯಗಳೇ ಅತ್ಯುತ್ತಮವಾದುವು.
- ಅತ್ಯಂತ ಕೆಟ್ಟ ಕುರುಡು, ಹೃದಯದ ಕುರುಡಾಗಿದೆ. ಹೃದಯದ ಶ್ರೀಮಂತಿಕೆಯೇ ನಿಜವಾದ ಶ್ರೀಮಂತಿಕೆ.
- ಕೊಡುವ ಕೈ ಪಡೆಯುವ ಕೈಗಿಂತ ಉತ್ತಮವಾಗಿದೆ.
- ಪಾಪ ಕಾರ್ಯಗಳ ಪೈಕಿ ಅತ್ಯಂತ ಘೋರವಾದುದು ಸುಳ್ಳು.



- ಮನುಷ್ಯನ ಅತ್ಯುತ್ತಮ ಬುತ್ತಿ ದೈವಭಕ್ತಿಯಾಗಿದೆ.
- ಮದ್ಯಪಾನವು ಕೆಡುಕುಗಳ ಜನನಿಯಾಗಿದೆ.

ಸಈದ್‌ರ ಬರಹ ಶೈಲಿ ಭರತ ಇಳಿತಗಳಿಲ್ಲದೆ, ಮೈದಾನದ ತೊರೆಯಂತೆ ಹರಿಯುತ್ತದೆ. ಕಾಲಾನುಕ್ರಮದ ಗತಿಯಲ್ಲಿ ಸಾಗುವ ಈ ಕತೆಯ ತಂತ್ರವೂ ಸರಳವಾದದ್ದೇ. ಕಟ್ಟಡವೂ ಅಷ್ಟೇ. ಪುರಾಣದ ಛಾಯೆಯೂ ಕಾದಂಬರಿಯ ಮೋಹಕತೆಯೂ ಮೇಳೈಸಿರುವ ಈ ಕೃತಿಯ ಘಟನೆಗಳಾಗಲಿ ಸಂಗತಿಗಳಾಗಲಿ ಕಟ್ಟಿದುವಲ್ಲ, ಹುಟ್ಟಿದುವು. ಸನ್ನಿವೇಶಗಳಂತು ನೈಜವಾದುವು. ಇದನ್ನೋದುವಾಗ ಅರೇಬಿಯಾದ ಪವಿತ್ರ ಭೂಮಿಯ ಮೇಲೆ ಸಂಚರಿಸುತ್ತಿದ್ದಂತೆ, ಜಗತ್ತಿನ ಶ್ರೇಷ್ಠತಮ ಧಾರ್ಮಿಕ ರಾಜಧಾನಿಯಾದ ಮದೀನಾದ ಜೀವನವಾಹಿನಿಯಲ್ಲಿ ಸೇರಿಕೊಂಡಂತೆ, ಪ್ರವಾದಿ ವರ್ಯರ(ಸ) ಸುಖ ದುಃಖಗಳಲ್ಲಿ ಪಾಲ್ಗೊಳ್ಳುತ್ತಿರುವಂತೆ, ಕಅಬಾ ಮಂದಿರವನ್ನು ಪ್ರದಕ್ಷಿಣೆ ಮಾಡುತ್ತಿದ್ದಂತೆ, ವಿಶ್ವದ ಪ್ರಪ್ರಥಮ ಮಸೀದಿಯಲ್ಲಿ ನಮಾಝ್ ಮಾಡುತ್ತಿದ್ದಂತೆ, ಅಲ್ಲಿಯ ಖರ್ಜೂರವನ್ನು ಸವಿಯುತ್ತಿದ್ದಂತೆ, ಪ್ರವಾದಿಗಳ ಅಂತಿಮ ಯಾತ್ರೆಯಲ್ಲಿ ಹಾಜರಿದ್ದಂತೆ ಅನುಭವವಾಗುತ್ತದೆ. ಬುದ್ಧ, ಯೇಸುಕ್ರಿಸ್ತ, ಬಸವೇಶ್ವರರ ನೆನಪಾಗುತ್ತದೆ. ಮುಹಮ್ಮದ್‌ರ(ಸ) ಜೀವನ ಕಥಾಪೀಯೂಷವನ್ನು ಕನ್ನಡಿಗರಿಗೂಡಿದ, ಕನ್ನಡ ಸಾಹಿತ್ಯವನ್ನು ಸಂಪನ್ನ ಗೊಳಿಸಿದ ಇಬ್ರಾಹೀಮ್ ಸಈದ್‌ರು ಪುಣ್ಯವಂತರು, ಅಭಿನಂದನೀಯರು.

ಜಗತ್ತಿನಲ್ಲಿ ಶಾಶ್ವತವಾಗಿ ಶಾಂತಿ ನೆಲಸಬೇಕೆಂದು, ಮಾನವಕುಲ ಸಾಮರಸ್ಯ ಸೋದರತ್ವದಿಂದ ಬಾಳಬೇಕೆಂದು ಬಯಸುವವರು ಸಹಬಾಳ್ವೆಯಿಂದಲ್ಲದೆ ನಿರ್ದುಷ್ಟ ಸುಖ ದೊರೆಯಲಾರದೆಂದು ಯೋಚಿಸುವ ವಿವೇಕಿಗಳು ಕೊನೆಯ ಪಕ್ಷ ಉಪನಿಷತ್ತು, ತ್ರಿಪಿಟಕ, ಬೈಬಲ್, ಕುರ್‌ಆನ್‌ಗಳನ್ನಾದರೂ ಅಧ್ಯಯನ ಮಾಡಬೇಕು. ಸ್ವಾಮಿ ವಿವೇಕಾನಂದರ ಉಪದೇಶವನ್ನು ಗ್ರಹಿಸಬೇಕು. ಬಹುಸಮಾಜ - ಬಹುಸಂಸ್ಕೃತಿಗಳ ಶ್ರೀಮಂತಿಕೆಯುಳ್ಳ ಭರತ ಖಂಡದಂತಹ ದೇಶಗಳಲ್ಲಂತು ಯೇಸು, ಮುಹಮ್ಮದ್‌ರ(ಸ) ಗಾಢ ಪರಿಚಯ ಅನಿವಾರ್ಯ. ಏಕದೇವೋಪಾಸನೆ, ಉಪವಾಸಾದಿ ವ್ರತನಿಷ್ಠೆ, ಸರ್ವಸಮಾನತೆ, ಭ್ರಾತೃತ್ವ ಮತ್ತು ನೈತಿಕ ಶ್ರದ್ಧೆ ಯಾವ ಸಮಾಜದಲ್ಲಿ ಚಾಲ್ತಿಯಲ್ಲಿರುತ್ತವೆಯೋ ಆ ಸಮಾಜ ಜಾತೀಯ ಛಿದ್ರತೆಯಿಂದ ಮುಕ್ತವಾಗಿದ್ದು, ಏಕಶಿಲಾ ಸದೃಶವಾಗಿ ಸುಭದ್ರವಾಗಿರುತ್ತದೆ. ವೈರಿಗಳಿಗೆ ಅಭೇದ್ಯ ಕೋಟೆಯಾಗಿರುತ್ತದೆಂಬ ಅಪೂರ್ವ ಪಾಠವನ್ನು ಪ್ರವಾದಿವರ್ಯರ(ಸ) ಜೀವನ ಸಂದೇಶದಿಂದ ಕಲಿಯಬಹುದಾಗಿದೆ. ಅದನ್ನು ಕಲಿತದ್ದಾದರೆ ಭಾರತ ಬದುಕುತ್ತದೆ. ಇಲ್ಲ, ನಾಶಹೊಂದುತ್ತದೆ. ಕ್ರಿ. ಶ. 1017ರಲ್ಲಿ ಭಾರತಕ್ಕೆ ಬಂದಿದ್ದ ಅಲ್ ಬರೂನಿ ಭಗವದ್ಗೀತೆ-ಉಪನಿಷತ್ತುಗಳನ್ನು

ಅಧ್ಯಯನ ಮಾಡಿದ ನಂತರ ಇಸ್ಲಾಮ್ ಮತ್ತು ಹಿಂದೂ ಧರ್ಮಗಳ ನಡುವೆ ಮಹದಂತರವಿಲ್ಲವೆಂದು ಹೇಳುತ್ತಾನೆ. ಬುದ್ಧ, ಮೋಸೆಸ್, ಉಪನಿಷದೃಷಿಗಳು, ಮಹಾವೀರ, ಜೊರಾಸ್ಟರ, ಯೇಸು, ಮುಹಮ್ಮದ್, ನಾನಕ್, ಬಸವೇಶ್ವರ ಮೊದಲಾದವರ ಆಶೀರ್ವಾದಕ್ಕೆ ಪಾತ್ರವಾಗಿರುವ ಭರತಖಂಡದ ಪುಣ್ಯಕ್ಕೆ ಪಾರವಿಲ್ಲ, ಎಣೆಯಿಲ್ಲ. ಆದರೆ ಆ ನಿಜದ ನೆಲೆಯನ್ನರಿತು, ಅನುಭವಿಸುವ ಬದುಕುವ ಜನ ಬೇಕು.

ಇಸ್ಲಾಮ್ ಧರ್ಮ ಭರತಖಂಡಕ್ಕೆ ಕಾಲಿಟ್ಟು ಒಂದು ಸಾವಿರದ ಇನ್ನೂರು ವರ್ಷಗಳೇ ಸಂದಿವೆ. ಪ್ರಾರಂಭದಲ್ಲಿ ಹಿಂದೂ ಮುಸ್ಲಿಮರ ನಡುವಣ ಸಮರಕ್ಕೆ ನೆಲದ ದಾಹ, ಸಿರಿಯ ಕೊಳ್ಳೆ ಕಾರಣವೇ ಹೊರತು, ಮತಾಂಧತೆಯಲ್ಲ. ಅದು ಆಗಿನ ಜಾಗತಿಕ ವರ್ತನೆಯಾಗಿತ್ತು. ಯೂರೋಪಿಯನರು ಜಗತ್ತಿನಲ್ಲೆಲ್ಲ ಹರಡಿಕೊಂಡದ್ದಕ್ಕೆ ಅವರ ಭೂದಾಹ ಮತ್ತು ಸಾಹಸ ಮನೋಧರ್ಮಗಳೇ ಪ್ರಬಲ ಕಾರಣ. ಆಂಗ್ಲರು ಇಂಡಿಯಾ ದೇಶಕ್ಕೆ ಬಂದದ್ದು ವ್ಯಾಪಾರ ವಾಣಿಜ್ಯಗಳಿಗಾಗಿ ಎಂಬುದು ಐತಿಹಾಸಿಕ ಸತ್ಯ. ವಾಣಿಜ್ಯ ಸಾಹಸದ ಯಶಸ್ಸು ಅವರ ಅಧಿಕಾರ ದಾಹವನ್ನು ಕೆರಳಿಸುತ್ತದೆ. ಅವರು ಜಾತಿಗಳ ಮೇಲೆ ಜಾತಿಗಳನ್ನೆತ್ತಿ ಕಟ್ಟಿ, ಮತದ ಅಥವಾ ಅಲ್ಪಸಂಖ್ಯಾತರ ಹೆಸರಿನಲ್ಲಿ ಎರಡು ಪ್ರಬಲ ಕೋಮುಗಳನ್ನು ವಿಭಜಿಸಿ, ರಾಜರಾಜರ ನಡುವೆ ಕಲಹ ತಂದು ಹಾಕಿ, ಇಂಡಿಯಾ ದೇಶವನ್ನೆಲ್ಲ ವಶಪಡಿಸಿಕೊಂಡರೆಂಬುದು ಲೋಕ ವೇದ್ಯ. ಈ ನೂರಾರು ವರ್ಷಗಳ ಅವಧಿಯಲ್ಲಿ ಹಿಂದೂ ಮುಸ್ಲಿಮರ ನಡುವೆ ಸಾಮಾಜಿಕ, ಸಾಂಸ್ಕೃತಿಕ ವಿನಿಮಯ ಕಣ್ಣು ಕುಕ್ಕುವಷ್ಟರ ಮಟ್ಟಿಗೆ ಅನಿವಾರ್ಯವಾಗಿ ನಡೆದಿದೆಯೆಂಬುದು ಸರ್ವರಿಗೂ ಗೊತ್ತಿರುವಂಥದೇ. ಮೇಲಾಗಿ ಹಿಂದೂ-ಮುಸ್ಲಿಮರಲ್ಲಿ ಹರಿಯುವ ರಕ್ತ ಒಂದೆಯಲ್ಲವೇ? ಸೆಮಿಟಿಕ್ ಮತಗಳಲ್ಲಿ ಕಾಣಲಾಗದ ಬ್ರಹ್ಮಾತ್ಮ ಐಕ್ಯ ತತ್ವ ಸೂಫಿ ಪಂಥದಲ್ಲಿ ಕಾಣಲು ಉಪನಿಷತ್ತಿನ ಆಧ್ಯಾತ್ಮ ಸಿದ್ಧಾಂತ ಕಾರಣವಲ್ಲವೇ? ಬಂಗಾಳಿ ಮುಸ್ಲಿಮರು ಅಲ್ಲಿಯ ಬೌದ್ಧ ವೈಷ್ಣವ ಶಾಕ್ತೇಯ ಸಾಧುಸಂತರೊಡನೆ ಬೆಂಬಲವಾಗಿ ಬಂಗಾಳೀ ಸಾಹಿತ್ಯದ ಸಂವರ್ಧನೆಗಾಗಿ ದುಡಿದಿಲ್ಲವೇ?

ಭರತ ಖಂಡ ವಿಶಾಲ ದೃಷ್ಟಿಯ ಸುಂದರ ಸಮನ್ವಯ ರಾಷ್ಟ್ರ. ತನ್ನಲ್ಲಿಗೆ ಬಂದ ಯಾವ ಸಂಸ್ಕೃತಿ-ಮತಗಳನ್ನಾಗಲೀ, ತನ್ನ ಗರ್ಭದಿಂದಲೇ ಹೊರಬಂದದ್ದು, ತನ್ನಿಂದ ಬೇರೆಯಾದ ಇತರ ಮತಗಳನ್ನಾಗಲೀ ಅದು ದ್ವೇಷಿಸದೆ, ನಿರಾಕರಿಸದೆ, ಹೊರಗಟ್ಟದೆ, ಅವುಗಳ ಒಳ್ಳೆಯ ಅಂಶಗಳನ್ನೆಲ್ಲ ಅರಗಿಸಿಕೊಂಡಿದೆ. ಇಂದಿನ ಭರತಖಂಡದ ಸಾಂಸ್ಕೃತಿಕ ವಿಕಾಸಕ್ಕೆ ಪ್ರೇರಕಶಕ್ತಿ ಇಲ್ಲಿಯ ಹಿಂದೂ ಮುಸ್ಲಿಮಾದಿ ಎಲ್ಲ ಜನತೆಯ ಮಧುರ ಮೈತ್ರಿ ಸಹಕಾರಗಳೆಂಬುದರ ಅರಿವಿಲ್ಲದಿರುವುದೇ ನಮ್ಮ ಬೀಳಿಗೆ ಕಾರಣವಾಗಿದೆ. ಈ ಅಜ್ಞಾನ ಕಾರ್ಕೋಟಕ ತನ್ನ ಪ್ರತ್ಯೇಕತಾಭಾವದ ಹೆಡೆಯನ್ನೆತ್ತಿ



ಇಂದು ರಾಜಕೀಯದಲ್ಲಿ ವಿರೂಪ ಕಾರಕವಾದ ಮಾರಕ ವಿಷವನ್ನು ಕಾರಿ, ಅಖಂಡ ರಾಷ್ಟ್ರ ಪುರುಷನನ್ನು ಇಬ್ಭಾಗ ಮಾಡಿದೆ'* ಎಂಬ ರಾಷ್ಟ್ರಕವಿ ಕುವೆಂಪು ಅವರ ಕಾಣ್ಕೆ ನುಡಿಯ ಅರ್ಥವನ್ನರಿತು ಜನತೆ ವಿವೇಕದಿಂದ ವರ್ತಿಸಬೇಕಾಗಿದೆ. ಹಿಂದೂ ಮುಸ್ಲಿಮರ ನಡುವೆ ಎಷ್ಟು ಘರ್ಷಣೆಗಳು ನಡೆಯುತ್ತವೆಯೋ, ಅದಕ್ಕಿಂತ ಅಧಿಕವಾಗಿ ಹಿಂದೂ-ಹಿಂದೂಗಳ ನಡುವೆ ದಿನದಿನವೂ ಕಲಹಗಳು ನಡೆಯುತ್ತಿವೆಯೆಂಬ ಸತ್ಯವನ್ನು ವಿವೇಕಿಗಳು ಅರಿಯಬೇಕಾಗಿದೆ. ಎರಡೂ ಧರ್ಮಗಳ ಆಧ್ಯಾತ್ಮಿಕ-ಸಾಂಸ್ಕೃತಿಕ ಮೌಲ್ಯಗಳನ್ನು ಎಲ್ಲರೂ ಅರಿಯಲು ಯತ್ನಿಸಿದರೆ, ಅವರ ನಡುವಣ ಅಜ್ಞಾನದ ಕಂದಕ ಕಿರಿದಾಗುತ್ತದೆ; ವಿರಸ ವೈಷಮ್ಯಗಳು ಅಳಿಯುತ್ತವೆಂಬುದಂತು ನಿಜ. ಪ್ರವಾದಿ ಮುಹಮ್ಮದ್(ಸ) ನೂರಿಪ್ಪತ್ತು ಕೋಟಿ ಮುಸ್ಲಿಮರಿಗೆ ಮಾತ್ರವಲ್ಲ, ಇಡೀ ಜಗತ್ತಿನ ಕಣ್ಣು ತೆರೆಸಿದ, ಆಧ್ಯಾತ್ಮದ ಜತೆಗೆ ಜೀವನ ವಿಧಾನವನ್ನು ಸಹ ಬೋಧಿಸಿದ ಮಹಾನ್ ಧೀಮಂತ ವ್ಯಕ್ತಿ. ಸರ್ವೇಶ್ವರನಿಗೆ ಬಹುಪ್ರಿಯರಾದ ಅವರನ್ನು ಗೌರವಿಸಬೇಕಾದುದು ಎಲ್ಲ ಸಜ್ಜನರ, ಸತ್ಯವಂತರ ಧರ್ಮ. 'ಏಕಂ ಸತ್ ಬಹುಧಾ ವಿಪ್ರಾ ವದಂತಿ.' ಅಂತಹ ಮಹಾತ್ಮರ ಜೀವನ ಚರಿತ್ರೆಯನ್ನೋದುವುದೇ ಪುಣ್ಯ. ಅವರ ಸಂದೇಶವನ್ನು ಅನುಷ್ಠಾನಗೈಯುವುದೇ ಶ್ರೇಷ್ಠತಮ ಪುಣ್ಯ! ಅಲ್ಲಾಹನ ಕೃಪೆಯಿಂದ, ಪ್ರವಾದಿಗಳ ಆಶೀರ್ವಾದದಿಂದ ಹಿಂದೂ ಮುಸ್ಲಿಮರು ಮಾನವರಾಗಿ ಬಾಳಲಿ, ಭಾರತೀಯರಾಗಿ ಕನ್ನಡಿಗರಾಗಿ ಅಭ್ಯುದಯದ ಸ್ನೇಹ ಸಹಕಾರಗಳ ಪತಾಕೆಯನ್ನು ಹಾರಿಸುವಂತೆ ಈ ದಿವ್ಯಕೃತಿ ಪ್ರೇರಣೆ, ಪ್ರಚೋದನೆಗಳನ್ನು ನೀಡಲೆಂದು ಆಶಿಸುತ್ತೇನೆ.

ಇಬ್ರಾಹೀಮ್ ಸಈದ್‌ರು ಹಿಂದೂ ಮುಸ್ಲಿಮ್ ಜನಾಂಗಗಳ ನಡುವಣ ಸ್ನೇಹ ಸೇತುವೆಯಂತಿದ್ದಾರೆ. ಮುಹಮ್ಮದರ ಜೀವನ ಸಂದೇಶದಿಂದ ಕನ್ನಡಿಗರ ಬದುಕು ಹಸನಾಗುವುದಾದರೆ, ಹಿಂದೂ ಮುಸ್ಲಿಮರ ಬಾಂಧವ್ಯ ಬೆಸುಗೆಗೊಳ್ಳುವುದಾದರೆ, ಗ್ರಂಥಕರ್ತರ ಶ್ರಮ ಸಾರ್ಥಕವಾಗುತ್ತದೆಂದೂ, ಅವರಿಗೆ ತೃಪ್ತಿಯಾಗುತ್ತದೆಂದೂ, ಅಂತಹ ಭಾಗ್ಯ ಕೂಡಿ ಬರಲೆಂದೂ ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

**- ದೇ. ಜವರೇಗೌಡ (ದೇಜಗೌ)**

ಮೈಸೂರು<br>
4-2-95

ವಿಶ್ರಾಂತ ಉಪಕುಲಪತಿ<br>
ಮೈಸೂರು ವಿಶ್ವವಿದ್ಯಾಲಯ

---

*ಶ್ರೀ ಮುಹಮ್ಮದ್ ಅಬ್ಬಾಸ್ ಷೂಸ್ತ್ರಿಯವರ 'ಇಸ್ಲಾಮ್ ಸಂಸ್ಕೃತಿ'ಗೆ ಬರೆದ ಮುನ್ನುಡಿಯಿಂದ ಉದ್ಧೃತ.